ನನಗೆ ಪ್ರೀತ್ಯಾಸ್ಪದವಾದ ಸ್ತೋತ್ರಗಳು ಐದು. ಭಗವದ್ಗೀತಾ, ವಿಷ್ಣು ಸಹಸ್ರನಾಮ. ಭೀಷ್ಮಸ್ತವರಾಜ, ಗಜೇಂದ್ರಮೋಕ್ಷ, ಮನುಸ್ಮೃತಿ, ಈ ಐದು ಸ್ತೋತ್ರಗಳನ್ನು ಕೊನೆಗೆ ಇವುಗಳಲ್ಲಿ ಮುಖ್ಯವಾಗಿ ಗೀತಾ, ವಿಷ್ಣು ಸಹಸ್ರನಾಮಗಳನ್ನು ಪಠಿಸಿ ಪಾರಾಯಣ ಮಾಡಿದವರ ಮೇಲೆ ನಾನು ಪ್ರಸನ್ನನಾಗುತ್ತೇನೆ. ಒಂದು ಹನಿ ಸಾಲಿಗ್ರಾಮ ಶಿಲೆಯ ನೀರನ್ನು ಕುಡಿದರೂ ಕೂಡ ಆ ಮನುಷ್ಯನು ಮೋಕ್ಷಕ್ಕೆ ಹೋಗುತ್ತಾನೆ. ಸಾಲಿಗ್ರಾಮ ಶಿಲೆಯ ಪಾದೋದಕವನ್ನು ತಲೆಯ ಮೇಲೆ ಧರಿಸಿದವನೂ ಬಾಯಿಂದ ಕುಡಿದವನೂ ಯಾವಾಗಲೂ ಪರಮ ಪವಿತ್ರ. ಇಂಥ ಮನುಷ್ಯನಿಗ ಸೂತಕವು ಕೂಡ ಆಗುವದಿಲ್ಲ. ಮರಣ ಕಾಲದಲ್ಲಿ ಭಗವಂತನ ಈ ಪಾದೋದಕವನ್ನು ಕುಡಿದವರು ಅಥವಾ ಬಂಧು ಬಾಂಧವರಿಂದ ಒತ್ತಾಯದಿಂದ ಕುಡಿಸಲ್ಪಟ್ಟವರು ಅತ್ಯುತ್ತಮವಾದ ಸದ್ಗತಿಯನ್ನು ಹೊಂದುತ್ತಾರೆ.

## ವೀರಬಾಹು ಮಹಾರಾಜನ ಪೂರ್ವ ಜನ್ಮದ ವೃತ್ತಾಂತ

**ಭಗವಂತ:-** ಶಾರದಾಪತಿಯೇ! ಪೂರ್ವಕಾಲದಲ್ಲಿ ಕಾಂಪಿಲ್ಯ ನಗರದಲ್ಲಿ ವೀರಬಾಹು ಎಂಬ ಹೆಸರಿನ ಒಬ್ಬ ರಾಜನು ಆಗಿಹೋದನು. ಅವನು ತನ್ನ ಹೆಸರಿಗೆ ತಕ್ಕಂತೆ ಹೊರಗಿನ ವೈರಿಗಳನ್ನೆಲ್ಲ ಗೆದ್ದಿದ್ದ. ಅಂತರಂಗದ ವೈರಿಗಳಾದ ಕಾಮ ಕ್ರೋಧಗಳ ಮೇಲೂ ಗೆಲುವನ್ನು ಸಾಧಿಸಿದ್ದ. ಸತ್ಯಅವನ ನಿತ್ಯ ವ್ರತ. ಬ್ರಹ್ಮಜ್ಞಾನ ಅವನ ಸಾಧನೆ. ಭಕ್ತಿ ಅವನ ಸಿದ್ಧಿ. ಅವನ ಸ್ವಭಾವ ಭೂತದಯೆ, ಹರಿಕಥಾಶ್ರವಣ ಅವನ ಹವ್ಯಾಸ. ಸುಂದರಿಯಾದ ಮಡದಿಯು ಆ ರಾಜರ್ಷಿಗೆ ತಕ್ಕವಳಾದ ಧರ್ಮಪತ್ನಿ. ಆ ರಾಜದಂಪತಿ ಗಳಿಬ್ಬರೂ ನನ್ನಲ್ಲಿಯೇ ನಿಷ್ಠರು. ಭಕ್ತಶ್ರೇಷ್ಠರು. ವಿಷ್ಣುವಿನ ಹೊರತು ಬೇರೆ ದೇವರ ಹೆಸರೇ ಗೊತ್ತಿರಲಿಲ್ಲ ಆ ರಾಜರ್ಷಿಗೆ.

ಒಂದು ದಿನ ಅಧ್ಯಾತ್ಮನಿಷ್ಠನಾದ ಆ ಅರಸನ ಮನೆಗೆ ಮಹಾತ್ಮರಾದ ಭಾರದ್ವಾಜ ಮಹರ್ಷಿಗಳು ಆಗಮಿಸಿದರು. ಅವರನ್ನು ಕಂಡ ಕೂಡಲೇ ಸಾಷ್ಟಾಂಗ ಪ್ರಣಾಮ ಮಾಡಿದ ವೀರಬಾಹು. ಭಕ್ತಿಯಿಂದ ಆಸನವನ್ನು ತಾನೇ ಎದ್ದು ಬಂದು ನೀಡಿದ. ಕೈಜೋಡಿಸಿ ವಿನಯದಿಂದ ನುಡಿದ- ''ಬ್ರಹ್ಮರ್ಷಿಗಳೇ! ನಾನು ಇಂದು ಧನ್ಯನಾದೆ ತಮ್ಮ ದರ್ಶನದಿಂದ. ಸಫಲವಾಯಿತು ನನ್ನ ಜನ್ಮ. ನಿಮ್ಮಂಥ ಯೋಗಿರಾಜರ ಆಗಮನ ನನ್ನ ಮೇಲಿರುವ ಶ್ರೀಹರಿಯ ಪರಮಾನುಗ್ರಹದ ದ್ಯೋತಕ. ನಿಮ್ಮ ಪಾದಸ್ಪರ್ಶದಿಂದ ನನ್ನ ಮನೆ ಪವಿತ್ರ. ಮನ ಪ್ರಸನ್ನ. ತಮ್ಮ ಕರುಣಾ ದೃಷ್ಟಿಪಾತ ಮಾತ್ರದಿಂದಲೇ ನನ್ನ ಜನ್ಮಾಂತರದ ಹಾಗೂ ಈ ಜನ್ಮದ ಪಾಪಗಳೆಲ್ಲವೂ ಕರಗಿ ಹೋದವು. ಇಂದು ನಾನು ನಿಜವಾಗಿಯೂ ಪಾಪ ಮುಕ್ತ ಪುಣ್ಯಯುಕ್ತ.

**ಭಾರದ್ವಾಜ:-** ರಾಜನ್! ನೀನು ಭಗವಂತನ ಏಕಾಂತ ಭಕ್ತ. ನಿನ್ನಂಥ ಪುಣ್ಯಪುರುಷನಿಂದ ಈ ಭೂಮಿಯು ಪವಿತ್ರಿತ. ಯಾವ ರಾಜ್ಯದಲ್ಲಿ ವಿಷ್ಣು ಭಕ್ತರು ಇರುವದಿಲ್ಲವೋ ಅಂಥ ರಾಜ್ಯದಲ್ಲಿ ಯಾರೂ ವಾಸಮಾಡಕೂಡದು. ಅದಕ್ಕಿಂತಲೂ ಕಾಡಿನಲ್ಲಿ ಯಾವುದಾದರೂ ತೀರ್ಥದ ದಂಡೆಯ ಮೇಲೆ ವಾಸಿಸುವದೇ ಮೇಲು. ವಿಷ್ಣು ಭಕ್ತರಾದ ರಾಜರು ಪೃಥ್ವಿಯನ್ನು ಆಳುತ್ತಿದ್ದರೆ ಆ ರಾಜ್ಯವು ವೈಕುಂಠಕ್ಕೆ ಸಮಾನ ಎಂದು ಎನಿಸುತ್ತದೆ. ಮಂತ್ರವಿಲ್ಲದೆ ಆಹುತಿ, ಕರು ಸತ್ತ ಹಸುವಿನ ಹಾಲು, ದಶಮಿ ತಿಥಿಯಿಂದ ವಿದ್ಧವಾದ ಏಕಾದಶಿ, ಉದ್ದ ಕೂದಲುಗಳನ್ನು ಬೆಳೆಸಿದ ವಿಧವೆ, ಸ್ನಾನವಿಲ್ಲದೆ ಆಚರಿಸಿದ ವ್ರತ ಇವೆಲ್ಲವೂ ನಿಂದನೀಯ ಮತ್ತು ತ್ಯಾಜ್ಯ. ಅದರಂತೆ ವಿಷ್ಣು ಭಕ್ತರು ಇಲ್ಲದ

ಸಾಮ್ರಾಜ್ಯವು ನಿಂದ್ಯವೂ, ವರ್ಜ್ಯವೂ, ಹೇಯವೂ ಆಗಿರುತ್ತದೆ. ನಿನ್ನಂಥ ವೈಷ್ಣವೋತ್ತಮನಾದ ರಾಜನ ರಾಜ್ಯದಲ್ಲಿ ನಾವು ವಾಸಿಸುವದೂ ಒಂದು ಹೆಮ್ಮೆಯ ಸಂಗತಿ. ಹರ್ಷದ ವಿಷಯ. ಇಂದು ನಿನ್ನನ್ನು ನೋಡಿದ ನನ್ನ ಕಣ್ಣು, ನಿನ್ನೊಡನೆ ಮಾತನಾಡಿದ ನನ್ನ ನಾಲಿಗೆ, ನಿನ್ನ ಸಂಪರ್ಕ ಹೊಂದಿದ ಈ ನನ್ನ ದೇಹ ಎಲ್ಲವೂ ಪವಿತ್ರವಾಗಿವೆ. ನಿನಗೆ ಕಲ್ಯಾಣವಾಗಲಿ'' ಎಂದು ನುಡಿದರು.

ಇದೇ ಸಮಯದಲ್ಲಿ ವೀರಬಾಹು ಮಹಾರಾಜನ ಪ್ರೇಯಸಿಯೂ ಪಟ್ಟದ ಅರಸಿಯೂ ಆದ ಕಾಂತಿಮತೀ ಮಹಾರಾಣಿಯು ಅಲ್ಲಿಗೆ ಬಂದಳು. ಭಕ್ತಿಯಿಂದ ವಂದಿಸಿದಳು ಭಾರದ್ವಾಜರ ಚರಣಕಮಲಗಳಿಗೆ. ಅನಂತರ ವೀರಬಾಹು ಮಹಾರಾಜನು ಮುನಿಗಳನ್ನು ಕುರಿತು ಪ್ರಶ್ನೆಮಾಡಿದ- ''ಮುನಿ ಮಹೋದಯರೇ, ನನಗೆ ಈ ಜನ್ಮದಲ್ಲಿ ವಿಶಾಲವಾದ ಸಾಮ್ರಾಜ್ಯ ದೊರಕಿದೆ. ಅದಕ್ಕೆ ಎಲ್ಲಿಯೂ ಎಲ್ಲೆ ಇಲ್ಲ. ಒಂದು ಕಡೆಯೂ ಮುಳ್ಳು ಇಲ್ಲ. ನಮಗೆ ಒಬ್ಬ ಮಗನು ಇರುತ್ತಾನೆ. ಅವನಿಗೆ, ತಂದೆಗೆ ಎದುರು ಮಾತನಾಡಿ ಗೊತ್ತೇ ಇಲ್ಲ. ನನಗೆ ಒಬ್ಬ ಮಡದಿ ಇರುತ್ತಾಳೆ. ಈ ಕಾಂತಿಮತಿಗೆ ಪತಿಯ ಹೊರತು ಬೇರೆ ದೇವರೇ ಇಲ್ಲ. ಪತಿಸೇವೆಯ ಹೊರತು ಬೇರೆ ಧರ್ಮವೇ ಇಲ್ಲ. ಬಯಸಿದ ಭಾಗ್ಯವೆಲ್ಲವೂ ನನ್ನ ಅಡಿಯಲ್ಲಿ. ನೆನೆದ ಇಷ್ಟಾರ್ಥಗಳೆಲ್ಲವೂ ನನ್ನ ಉಡಿಯಲ್ಲಿ. ಇಂಥ ಅಪರೂಪದ ಸೌಭಾಗ್ಯ ನನ್ನ ಸ್ವತ್ತಾಗಬೇಕಾದರೆ ಪೂರ್ವಜನ್ಮದಲ್ಲಿ ನಾನು ಏನು ಇದ್ದೆ? ಈ ನನ್ನ ಸೌಭಾಗ್ಯವತಿಯೂ ಜನ್ಮಾಂತರದಲ್ಲಿ ಏನು ಆಗಿದ್ದಳು? ನಾವಿಬ್ಬರು ಯಾವ ಪುಣ್ಯ ಮಾಡಿದ್ದೆವು?

**ಭಾರದ್ವಾಜ:-** ರಾಜನೇ, ನೀನು ಕಳೆದ ಜನ್ಮದಲ್ಲಿ ಅತ್ಯಂತ ಕ್ಷುದ್ರ. ದಟ್ಟದರಿದ್ರ, ದುರಾಚಾರಿ ಶೂದ್ರ. ಆಗ ನೀನು ಮಾಡಿದ ಹಿಂಸೆಗಳಿಗೆ ಲೆಕ್ಕವಿಲ್ಲ. ಆಗ ದುರಾಚಾರವೇ ನಿನ್ನ ಛಲ. ಉಚ್ಛೃಂಖಲ ಪ್ರವೃತ್ತಿಯೇ ನಿನ್ನ ಬಲ. ವ್ಯಭಿಚಾರ ನಿನ್ನ ಸ್ವಭಾವ. ಕೃತಘ್ನತೆ ನಿನ್ನ ಸ್ವರೂಪ. ನಾಸ್ತಿಕ್ಯ ನಿನ್ನ ಹೆಮ್ಮೆ. ಆಗ ನೀನು ಸರ್ವ ದುರ್ಗುಣ ಸಂಪನ್ನ. ಆದರೆ ಇಂಥ ದುಷ್ಟ ಜನ್ಮದಲ್ಲಿಯೂ ಈ ಕಾಂತಿಮತಿಯು ನಿನಗೆ ಪತ್ನಿಯಾಗಿದ್ದುದು ನಿನ್ನ ಸೌಭಾಗ್ಯ. ನೀನು ಪರಮ ಪಾಪಿಷ್ಠನಾಗಿದ್ದರೂ ಆಗ ನಿನ್ನ ಸೇವೆಯನ್ನು ಈ ಪತಿವ್ರತೆಯು ಅತ್ಯಂತ ನಿಷ್ಠೆಯಿಂದ ಮಾಡುತ್ತಿದ್ದಳು. ಆಗ ನೀನು ಮಾಡದ ಪಾಪವಿಲ್ಲ. ಆಚರಿಸದ ದುಷ್ಕಾರ್ಯವಿಲ್ಲ.

ಆದರಿಂದ ನಿನ್ನ ಮಿತ್ರರು ತ್ಯಜಿಸಿದರು ನಿನ್ನನ್ನು. ದೂರ ಸರಿದರು ಬಂಧು ಬಳಗದವರು. ಹಿರಿಯರು ಮಾಡಿಟ್ಟ ಹಣವೆಲ್ಲವೂ ಕರಗಿ ಹೋಯಿತು ನಿನ್ನ ಅವ್ಯಾಪಾರ ದುರ್ವ್ಯಾಪಾರಗಳಿಂದ. ಎಲ್ಲರೂ ನಿನ್ನನ್ನು ಬಿಟ್ಟರೂ ಈ ನಿನ್ನ ಸಾಧ್ವೀಮಣಿ ಮಾತ್ರ ನಿನ್ನನ್ನು ತೊರೆಯಲಿಲ್ಲ. ಕಡುಬಡತನದಲ್ಲಿ ಕೊರಗಿ ಸೊರಗಿ ಕ್ಷೀಣಳಾದರೂ ನಿನ್ನ ಸೇವೆಯನ್ನು ಮಾತ್ರ ಅವಳು ಬಿಡಲಿಲ್ಲ. ಆದರೆ ಎಲ್ಲ ಕಡೆಯಿಂದಲೂ ಧಿಕ್ಕಾರ, ಅಪಮಾನ, ಸೋಲುಗಳನ್ನು ಉಂಡ ನೀನು ಮಾತ್ರ ಮನೆಮಾರು ಎಲ್ಲವನ್ನೂ ಬಿಟ್ಟು ಕಾಡನ್ನು ಈ ಮಡದಿಯೊಡನೆ ಸೇರಿದೆ. ಅಲ್ಲಿರುವ ಅನೇಕ ಪ್ರಾಣಿಗಳನ್ನು ಕೊಂದು ಅದರಿಂದ ಬದುಕಿದೆ. ಹೀಗೆ ಅನೇಕ ವರ್ಷಗಳು ಕಳೆದವು. ಒಂದು ದಿನ ಓರ್ವ ಮುನಿಯು ದಾರಿತಪ್ಪಿ ಆ ಬೆಂಗಾಡಿಗೆ ಬಂದನು. ಅವನ ಹೆಸರು ದೇವಶರ್ಮ. ಕಾಡುಮೇಡುಗಳಲ್ಲಿ ತಿರುತಿರುಗಿ, ವನ ವನ ಅಂಡಲೆದು ಬಳಲಿ ಬೆಂಡಾದ ಆ ಬ್ರಾಹ್ಮಣನು ಹಸಿವೆಯಿಂದ ಕೆಳಗೆ ಕುಸಿದುಬಿದ್ದ

ಕಾಡಿನಲ್ಲಿ. ಮಧ್ಯಾಹ್ನದ ಬಿಸಿಲು. ಸೂರ್ಯನು ಕೆಂಗಡಿಗಳನ್ನೆ ಕಿರಣರೂಪದಿಂದ ತಿರೆಯ ಕಡೆ ತೂರುತ್ತಲಿದ್ದ. ಆ ಉರಿಬಿಸಿಲಿನಲ್ಲಿ ನೆಲಕ್ಕೆ ಉರುಳಿಬಿದ್ದ ದೇವಶರ್ಮ. ಅವನನ್ನು ನೋಡಿ ನಿನಗೆ ಕರುಣೆ ಬಂದಿತು. ನೀನು ಅವನನ್ನು ಕೈಹಿಡಿದು ನಡೆಸಿದೆ. ನಿನ್ನ ಮನೆಗೆ ಕರೆದುಕೊಂಡು ಬಂದೆ. ನಿನ್ನ ಮನೆಯ ಎದುರು ಒಂದು ತಿಳಿನೀರಿನ ಹೊಕ್ಕರಣೆ. ಅದರ ತುಂಬ ತಾವರೆಗಳು. ಸರೋವರದ ದಂಡೆಯ ಮೇಲೆ ಸುಗಂಧಿ ಹೂಗಳನ್ನು ಹೊದಿಸಿದಂತಿರುವ ಅನೇಕ ಲತಾಕುಂಜ ನಿಕುಂಜಗಳು.

ನೀನು ಆ ಬ್ರಾಹ್ಮಣನನ್ನು ಕೈಹಿಡಿದು ಆ ಸರೋವರದ ಬಳಿಗೆ ಕರೆತಂದೆ. ಸರೋವರದ ತೀರದ ಮರದಡಿಯ ತಂಪಿಡಿದ ತಾಣದಲ್ಲಿ ನೀನು ಅವರನ್ನು ಕೂಡಿಸಿದೆ. ಅಲ್ಲಿಯ ತಣ್ಣೆಳಲಿನಲ್ಲಿ ಕುಳಿತು ಅಲ್ಲಿ ತೀಡುವ ತಂಬೆಲರಿನಿಂದ ಚೇತರಿಸಿಕೊಂಡ ಆ ಬ್ರಾಹ್ಮಣ. ಎದ್ದು ಆ ಹೊಕ್ಕರಣೆಯಲ್ಲಿ ಸ್ನಾನಮಾಡಿದ. ದೇವರ ಪೂಜೆಗೈದ, ಪಿತೃಗಳಿಗೆ ತರ್ಪಣ ನೀಡಿ ಅನಂತರ ತಾನು ಆ ಕೊಳದ ತಿಳಿನೀರನ್ನು ಕುಡಿದ. ಆಗ ಶೂದ್ರನಾದ ನೀನು ಈ ನಿನ್ನ ಹೆಂಡತಿಯೊಡನೆ ಬಂದು ಆ ಮುನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದೆ ಮತ್ತು ಭಕ್ತಿಯಿಂದ ಬೇಡಿಕೊಂಡೆ- ''ಪೂಜ್ಯರೇ, ಇಂದು ನೀವು ನನ್ನ ಅತಿಥಿಗಳು. ನಮ್ಮ ಉದ್ಧಾರಕ್ಕಾಗಿಯೇ ಇಂದು ನಿಮ್ಮ ಆಗಮನ ಆಗಿದೆ. ತಮ್ಮ ದರ್ಶನ ಮಾತ್ರದಿಂದಲೇ ನಮ್ಮ ಎಲ್ಲ ಪಾಪಗಳು ನಷ್ಟವಾಗಿ ಹೋದವು.'' ಅವರಿಗೆ ಹೀಗೆ ಹೇಳಿ ನೀನು ನಿನ್ನ ಮಡದಿಗೆ ಆಜ್ಞೆ ಮಾಡಿದೆ.- ''ಪ್ರಿಯೆ, ಇಂದು ನಮ್ಮ ಮನೆಗೆ ಬಂದವನು ಕೇವಲ ಅತಿಥಿಯಲ್ಲ, ಸಾಕ್ಷಾತ್ ದೇವರು. ಇವರಿಗಾಗಿ ನೀನು ಈಗ ರುಚಿಕರವಾದ ಮಾಗಿ ಹಣ್ಣಾದ ಒಳ್ಳೆಯ ಫಲಗಳನ್ನು ತಂದು ಕೊಡು.''

**ದೇವಶರ್ಮ ಬ್ರಾಹ್ಮಣ:-** ವತ್ಸ, ನಾನು ಹಾಗೆ ಬೇಕುಬೇಕಾದಲ್ಲಿ ಉಪಹಾರವನ್ನು ಸ್ವೀಕರಿಸುವುದಿಲ್ಲ. ನಿನ್ನ ಜಾತಿ ಯಾವುದು? ಕುಲ ಯಾವುದು? ಎಂಬುದನ್ನು ಮೊದಲು ಹೇಳು. ಕುಲ, ಜಾತಿ ಶೀಲಸ್ವಭಾವಗಳು ತಿಳಿಯದೇ ನಾನು ಏನನ್ನೂ ತೆಗೆದುಕೊಳ್ಳುವದಿಲ್ಲ.

**ಶೂದ್ರ:-** ಪೂಜ್ಯರೆ, ನಾನೊಬ್ಬ ಶೂದ್ರ, ನಿಮ್ಮ ಭಕ್ತ. ಇವಳು ನನ್ನ ಕೈ ಹಿಡಿದ ಮಡದಿ. ದೇವಭಕ್ತಳು. ಧರ್ಮನಿಷ್ಠಳು ಗುರುಹಿರಿಯರ ಸೇವಕಳು.''

ನೀನು ಇಷ್ಟು ಹೇಳುವಷ್ಟರಲ್ಲಿ ಈ ನಿನ್ನ ಹೆಂಡತಿಯು ಬಗೆ ಬಗೆಯ ಹಣ್ಣು ಹಂಪಲಗಳನ್ನು ನೀಡಿದಳು. ಆ ಶೂದ್ರ ಸ್ತ್ರೀಯ ಪಾತಿವ್ರತ್ಯ ಹಾಗು ಅತಿಥಿ ಸೇವಾಭಾವವನ್ನು ಕಂಡು ಪರಿತುಷ್ಟನಾಗಿದ್ದ ಆ ಬ್ರಾಹ್ಮಣ ಅವಳು ನೀಡಿದ ಫಲಾಹಾರಗಳನ್ನು ಸ್ವೀಕರಿಸಿದ. ಸರೋವರದಲ್ಲಿಯ ತಣ್ಣೀರನ್ನು ಕುಡಿದು ಅವನ ಮನಸ್ಸು ಪ್ರಸನ್ನವಾಯಿತು. ಅನಂತರ ಆ ಬ್ರಾಹ್ಮಣನು ಒಂದು ಮರದಡಿಯಯಲ್ಲಿ ವಿಶ್ರಾಂತಿ ತೆಗೆದುಕೊಂಡ. ಆ ಬಳಿಕ ಶೂದ್ರನಾದ ನೀನು ಮಡದಿಯೊಡನೆ ಮನೆಗೆ ಹೋಗಿ ಭೋಜನ ಮಾಡಿದೆ. ಅನಂತರ ಮತ್ತೆ ಆ ಬ್ರಾಹ್ಮಣನ ಬಳಿಗೆ ಬಂದು ಕೇಳಿದೆ- ''ಮುನಿ ಶ್ರೇಷ್ಠರೇ! ತಾವು ಇಂಥ ಈ ನಿರ್ಮಾನುಷವಾದ ಭೀಕರ ವನಾಂತರಕ್ಕೆ ಏಕೆ ಬಂದಿರಿ? ಎಲ್ಲಿಂದ ಬಂದಿರಿ?

**ಬ್ರಾಹ್ಮಣ:-** ''ಮಹನೀಯ! ನಾನು ಪ್ರಯಾಗಕ್ಕೆ ಹೊರಟಿದ್ದೇನೆ. ಈ ಮಾರ್ಗವು ನನಗೆ ತೀರ ಅಪರಿಚಿತ. ದಾರಿ ತಪ್ಪಿ ಈ ಘೋರ ಕಾಡಿಗೆ ಬಂದು ಬಿದ್ದೆ. ಹಸಿವೆ